ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 24 ನೇ ಮಾರ್ಚ್, 2020

ರಾಯಚೂರಿನಲ್ಲಿ ಇರುವ ಗ್ರೊತ್‌ಸೆಂಟರ್ ಬಗ್ಗೆ

ಶ್ರೀ ಎನ್. ಎಸ್. ಬೋಸ್‌ರಾಜು(ವಿಧಾನಸಭೆಯಿಂದ ಚುನಾಯಿತರಾದವರು):-

1520 (1854) ಮಾನ್ಯ ಬೃಹತ್ ಮತ್ತು ಮಧ್ಯಮ ಕೈಗಾರಿಕೆ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ರಾಜ್ಯದಲ್ಲಿ 2019-20 ಹಾಗೂ 2020-21ನೇ ಸಾಲಿನಲ್ಲಿ ನೂತನವಾಗಿ ಪ್ರಾರಂಭಿಸಿರುವ ಬೃಹತ್ ಕೈಗಾರಿಕೆಗಳು ಯಾವುವು; ಪ್ರಸ್ತುತ ಯಾವ ಪ್ರದೇಶಗಳಲ್ಲಿ ಪ್ರಾರಂಭಿಸಲಾಗಿವೆ; ಇವುಗಳಿಗೆ ಪ್ರೋತ್ಸಾಹಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು;

(ಆ) ರಾಯಚೂರು ಗ್ರೊತ್‌ಸೆಂಟರ್‌ನಲ್ಲಿ ಇರುವ ಬೃಹತ್ ಕೈಗಾರಿಕೆಗಳು ಯಾವುವು; ಇವು ಪ್ರಸ್ತುತ ಚಾಲನೆಯಲ್ಲಿ ಇವೆಯೇ; ಚಾಲನೆಯಲ್ಲಿದ್ದರೆ, ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಕಾರ್ಮಿಕ ಸಂಖ್ಯೆ ಎಷ್ಟು;

(ಇ) ಈ ಗ್ರೊತ್‌ಸೆಂಟರ್‌ನಲ್ಲಿ ನೀರು ಹಾಗೂ ವಿದ್ಯುತ್ ಸರಬರಾಜು ಪೂರೈಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು ?